# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 916 (1059) |
| ಉತ್ತರಿಸುವ ದಿನಾಂಕ | 22-12-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಂದಾಯ ಮತ್ತು ನೋಂದಣಿ ಇಲಾಖೆಯಲ್ಲಿ ಸರ್ವರ್‌ಡೌನ್ ಸಮಸ್ಯೆಯಿಂದಾಗಿ ಜನಸಾಮಾನ್ಯರಿಗೆ ಆಸ್ತಿ ನೋಂದಣಿ ವಿಳಂಭವಾಗುತ್ತಿರುವುದು ಮತ್ತು ರೈತರ ಅಗತ್ಯ ದಾಖಲೆಗಳನ್ನು ಪಡೆಯಲು ತೀವ್ರ ಅಡಚಣೆಯಾಗಿ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು ಬಂದಿದೆ.<br><br>1. ನೋಂದಣಿ ಮತ್ತು ಮುದ್ರಾಂಕ ಇಲಾಖೆಯ 'ಕಾವೇರಿ' ತಂತ್ರಾಂಶವನ್ನು ಕಂದಾಯ ಇಲಾಖೆಯ 'ಭೂಮಿ' ತಂತ್ರಾಂಶದೊಂದಿಗೆ, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ 'ಮೋಜಿಣಿ' ತಂತ್ರಾಂಶದೊಂದಿಗೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ 'ಇ-ಸ್ವತ್ತು' ತಂತ್ರಾಂಶದೊಂದಿಗೆ, ನಗರಾಭಿವೃದ್ಧಿ ಇಲಾಖೆಯ 'ಇ-ಆಸ್ತಿ' ಮತ್ತು 'ಯು.ಪಿ.ಓ.ಆರ್' ತಂತ್ರಾಂಶದೊಂದಿಗೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ 'ಸಕಾಲ' ತಂತ್ರಾಂಶದೊಂದಿಗೆ ಹಾಗೂ ಇ-ಆಡಳಿತ ಇಲಾಖೆಯ 'FRUITS' ತಂತ್ರಾಂಶದೊಂದಿಗೆ ಸಂಯೋಜಿಸಲಾಗಿರುತ್ತದೆ. ವಿವಿಧ ಇಲಾಖೆಗಳೊಂದಿಗೆ ಸಂಯೋಜಿಸಲಾಗಿರುವ ತಂತ್ರಾಂಶಗಳ ಸರ್ವರ್‌ಗಳಲ್ಲಿ ಯಾವುದಾದರೂ ತಾಂತ್ರಿಕ ಸಮಸ್ಯೆ ಉಂಟಾದಲ್ಲಿ ಕಾವೇರಿ ತಂತ್ರಾಂಶದಲ್ಲಿ ನೋಂದಣಿ ಪ್ರಕ್ರಿಯೆಗೆ ಅಡಚಣೆ ಉಂಟಾಗುತ್ತದೆ.<br><br>2. ಕಾವೇರಿ ತಂತ್ರಾಂಶವನ್ನು ಇತರೆ ಇಲಾಖೆಗಳ ಹಲವಾರು ತಂತ್ರಾಂಶಗಳೊಂದಿಗೆ ಸಂಯೋಜಿಸಲಾಗಿರುವುದರಿಂದ ಅದರ ಕಾರ್ಯಕ್ಷಮತೆಯು ಸಂಯೋಜನೆಯಾಗಿರುವ ತಂತ್ರಾಂಶಗಳ ಮೇಲೆ ಅವಲಂಬಿತವಾಗಿರುತ್ತದೆ.<br><br>3. ಕಾವೇರಿ ತಂತ್ರಾಂಶವನ್ನು 2003ರಲ್ಲಿ **Visual Basic** ಹಾಗೂ **Windows XP Platform** ಗಳಡಿ ಅಭಿವೃದ್ಧಿಪಡಿಸಲಾಗಿದ್ದು, ಈ ಎರಡು ತಂತ್ರಾಂಶಗಳು **Outdated** ಆಗಿರುವುದರಿಂದ ಹೊಸ ತಂತ್ರಾಂಶವನ್ನು ಅಭಿವೃದ್ಧಿಪಡಿಸುವ ಅವಶ್ಯಕತೆ ಇರುತ್ತದೆ.<br><br>4. ಪ್ರಸ್ತುತ ಕಾವೇರಿ ತಂತ್ರಾಂಶವು ಕೇಂದ್ರೀಕೃತ ಹಾಗೂ ಲೋಕಲ್ ಸರ್ವರ್‌ಗಳ ಮೂಲಕ ಕಾರ್ಯ ನಿರ್ವಹಿಸುತ್ತಿದ್ದು, ಉಪ ನೋಂದಣಿ ಕಛೇರಿಗಳಲ್ಲಿ ಕೆಲವೊಮ್ಮೆ ಸರ್ವರ್‌ಗಳು **abrupt shutdown** ಗೆ ಒಳಗಾಗಿ ಡೇಟಾಬೇಸ್ ಕ್ರಾಶ್ ಆಗುತ್ತಿತ್ತು. ಡೇಟಾಬೇಸ್ ಕ್ರಾಶ್ ಆದ ಸಂದರ್ಭದಲ್ಲಿ ಅದನ್ನು ಸರಿಪಡಿಸುವವರೆಗೆ ನೋಂದಣಿ ಕಾರ್ಯಕ್ಕೆ ಅಡಚಣೆಯಾಗುತ್ತಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ | ಹಾಗಿದ್ದಲ್ಲಿ, ಇಲಾಖೆಯು ಹಲವಾರು ವರ್ಷಗಳಿಂದ ಬಳಲುತ್ತಿರುವ ಸರ್ವರ್‌ಡೌನ್ ಸಮಸ್ಯೆಯನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: | ಸರ್ವರ್ ಸಮಸ್ಯೆಗಳನ್ನು ನಿವಾರಿಸಲು ಇಲಾಖೆಯು ತೆಗೆದುಕೊಂಡಿರುವ ಕ್ರಮಗಳು:<br><br>1. ಹಾಲಿ ಉಪಯೋಗಿಸಲಾಗುತ್ತಿರುವ ಕಾವೇರಿ ತಂತ್ರಾಂಶ 2003ರಲ್ಲಿ Visual Basic ಹಾಗೂ Windows XP Platform ಗಳಡಿ ಅಭಿವೃದ್ಧಿಪಡಿಸಲಾಗಿದ್ದು, ಈ ಎರಡು ತಂತ್ರಾಂಶಗಳು Outdated ಆಗಿರುವುದರಿಂದ ಹೊಸ ತಂತ್ರಾಂಶವನ್ನು ಅಭಿವೃದ್ಧಿಪಡಿಸುವ ಅವಶ್ಯಕತೆ ಇರುವುದರಿಂದ ಸೆಂಟರ್ ಫಾರ್ ಸ್ಮಾರ್ಟ್‌ಗೌವನ್ನೆನ್ಸ್ ಸಹಯೋಗದೊಂದಿಗೆ ಕಾವೇರಿ-2.0 ತಂತ್ರಾಂಶವನ್ನು ಅಭಿವೃದ್ಧಿಪಡಿಸಲಾಗುತ್ತಿದೆ. ಈ ವ್ಯವಸ್ಥೆಯಲ್ಲಿ ಕೇವಲ ಕೇಂದ್ರೀಕೃತ ಸರ್ವರ್ ಮಾತ್ರ ಇರುವುದರಿಂದ ಸರ್ವರ್ ಸಮಸ್ಯೆ ಉದ್ಭವಿಸುವುದಿಲ್ಲ.<br><br>2. ದಸ್ತಾವೇಜುಗಳ ನೋಂದಣಿ ಸಮಯದಲ್ಲಿ ಪಕ್ಷಕಾರರ ಮೊಬೈಲ್ ಸಂಖ್ಯೆಯನ್ನು ಓ.ಟಿ.ಪಿ ಮುಖಾಂತರ ಖಚಿತಪಡಿಸಿಕೊಳ್ಳುತ್ತಿದ್ದ ವ್ಯವಸ್ಥೆಯನ್ನು ಕೈಬಿಡಲಾಗಿದೆ. ಇದರಿಂದಾಗಿ ಓ.ಟಿ.ಪಿ ಸರ್ವರ್‌ನ ವ್ಯತ್ಯಯದಿಂದ ಸಾರ್ವಜನಿಕರಿಗೆ ಆಗುತ್ತಿದ್ದ ಅನಾನುಕೂಲಗಳನ್ನು ನಿವಾರಿಸಲಾಗಿದೆ.<br><br>3. ಎಲ್ಲಾ ಉಪ ನೋಂದಣಿ ಕಛೇರಿಗಳಿಗೆ ಹೊಸ ಯು.ಪಿ.ಎಸ್ ಹಾಗೂ ಬ್ಯಾಟರಿಗಳನ್ನು ಅಳವಡಿಸಲಾಗಿರುತ್ತದೆ. ಇದರಿಂದಾಗಿ ಉಪ ನೋಂದಣಿ ಕಛೇರಿಗಳಲ್ಲಿರುವ ಲೋಕಲ್ ಸರ್ವರ್‌ಗಳು abrupt shutdown ಗೆ ಒಳಗಾಗಿ ಡೇಟಾಬೇಸ್ ಕ್ರಾಶ್ ಆಗುತ್ತಿದ್ದುದನ್ನು ತಡೆಯಲಾಗಿರುತ್ತದೆ.<br><br>4. ಉಪ ನೋಂದಣಿ ಕಛೇರಿಗಳಲ್ಲಿ ಹಾಲಿ ಇರುವ ಹಾರ್ಡ್‌ವೇರ್‌ಗಳು 2013ರಲ್ಲಿ ಖರೀದಿಸಲಾಗಿದ್ದು, ಇವುಗಳ ಕಾರ್ಯಾವಧಿ ಮುಗಿದಿರುವುದರಿಂದ ಹೊಸ ಹಾರ್ಡ್‌ವೇರ್‌ಗಳ ಸರಬರಾಜು ಹಾಗೂ ನಿರ್ವಹಣೆಗೆ ಸೇವಾ ಪೂರೈಕೆದಾರರನ್ನು BOO ಮಾದರಿಯಲ್ಲಿ ಆಯ್ಕೆ ಮಾಡಲು ನಿರ್ಧರಿಸಲಾಗಿದ್ದು, ಅದರಂತೆ ಆರ್.ಎಫ್.ಪಿ.ಗೆ ಅನುಮೋದನೆ ನೀಡಲು ಪರಿಶೀಲಿಸಲಾಗುತ್ತಿದೆ.<br><br>5. ಕಾವೇರಿ ತಂತ್ರಾಂಶಕ್ಕೆ ಸಂಬಂಧಿಸಿದಂತೆ ಹಾಗೂ ಇಲಾಖೆಯಲ್ಲಿನ ಹಾರ್ಡ್‌ವೇರ್ ಮತ್ತು ಇತರೆ ಗಣಕೀಕರಣದ ವಿಷಯಗಳಿಗೆ ಸಂಬಂಧಿಸಿದಂತೆ ಅಗತ್ಯ ಮಾರ್ಗದರ್ಶನವನ್ನು ನೀಡಲು ಕಾವೇರಿ ಯೋಜನಾ ಉಸ್ತುವಾರಿ ಘಟಕಕ್ಕೆ ಹೊರಗುತ್ತಿಗೆ ಆಧಾರದ ಮೇಲೆ ತಾಂತ್ರಿಕ ಸದಸ್ಯರನ್ನು ಮೆ:ಕೆಪಿಎಂಜಿ ಅಡ್ವೇಜರಿ ಸರ್ವೀಸಸ್ ಪ್ರೈ.ಲಿ ಸಂಸ್ಥೆಯಿಂದ ನೇಮಕ ಮಾಡಿಕೊಳ್ಳಲಾಗಿದೆ. |

. . . 3

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 6. ಉಪ ನೋಂದಣಿ ಕಛೇರಿಗಳಲ್ಲಿನ ಹಾರ್ಡವೇರ್‌ಗಳ ನಿರ್ವಹಣೆಯನ್ನು ಈ ಹಿಂದೆ ಮೆ:ಕಾರ್ವಿ ಇನ್ಫೋಟೆಕ್ ಲಿ. ಸಂಸ್ಥೆಗೆ ವಹಿಸಲಾಗಿತ್ತು. ಸದರಿ ಸಂಸ್ಥೆಯು ಸಮರ್ಪಕ ಸೇವೆಯನ್ನು ನೀಡದೇ ಇದ್ದುದ್ದರಿಂದ ಇದನ್ನು ಬದಲಾಯಿಸಿ ಹಾರ್ಡವೇರ್‌ಗಳ ನಿರ್ವಹಣೆಯನ್ನು ಮೆ;ಕಿಯೋನಿಕ್ಸ್ ಸಂಸ್ಥೆಗೆ ವಹಿಸಲಾಗಿರುತ್ತದೆ.<br><br>7. ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳಿಗೆ ಹಾರ್ಡವೇರ್ ಇಂಜಿನಿಯರ್‌ಗಳಿಗೆ ಮತ್ತು ಡೇಟಾ ಎಂಟ್ರಿ ಆಪರೇಟರ್‌ಗಳಿಗೆ ಕಾವೇರಿ ತಂತ್ರಾಂಶ ಹಾಗೂ ಗಣಕೀಕರಣಕ್ಕೆ ಸಂಬಂಧಿಸಿದ ವಿಷಯಗಳಿಗೆ ತರಬೇತಿ ನೀಡಲು ಗಣಕಯಂತ್ರ ತರಬೇತಿ ಕೋಶವನ್ನು ಪ್ರಾರಂಭಿಸಲಾಗಿರುತ್ತದೆ. ಸದರಿ ತರಬೇತಿ ಕೋಶದಲ್ಲಿ ಇಲ್ಲಿಯವರೆಗೆ ಜಿಲ್ಲಾ ನೋಂದಣಾಧಿಕಾರಿಗಳಿಗೆ 02 ಬ್ಯಾಚ್‌ಗಳಲ್ಲಿ, ಹಾರ್ಡ್‌ವೇರ್ ಇಂಜಿನಿಯರ್‌ಗಳಿಗೆ 03 ಬ್ಯಾಚ್‌ಗಳಲ್ಲಿ, ದ್ವಿತೀಯ ದರ್ಜೆ ಸಹಾಯಕರಿಗೆ 02 ಬ್ಯಾಚ್‌ಗಳಲ್ಲಿ, ಗಣಕಯಂತ್ರ ನಿರ್ವಾಹರಿಗೆ 07 ಬ್ಯಾಚ್‌ಗಳಲ್ಲಿ ಹಾಗೂ ಪ್ರಥಮ ದರ್ಜೆ ಸಹಾಯಕರುಗಳಿಗೆ 06 ಬ್ಯಾಚ್‌ಗಳಲ್ಲಿ ತರಬೇತಿ ನೀಡಲಾಗಿದೆ. |
| ಇ | ಸುಧಾರಿತ ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಇಲಾಖೆಯ ಸಮಗ್ರ ಬದಲಾವಣೆಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: (ವಿವರ ನೀಡುವುದು) | ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಸಮಗ್ರ ಬದಲಾವಣೆ ತರುವ ನಿಟ್ಟಿನಲ್ಲಿ ಸುಧಾರಿತ ಆಧುನಿಕ ತಂತ್ರಜ್ಞಾನ ಬಳಸಲು ಈ ಕೆಳಗೆ ತಿಳಿಸಿರುವ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>1. ಸೆಂಟರ್ ಫಾರ್ ಸ್ಮಾರ್ಟ್‌ಗೌವನ್ನೆನ್ಸ್ ಸಹಯೋಗದೊಂದಿಗೆ ಕಾವೇರಿ–2.0 ತಂತ್ರಾಂಶವನ್ನು ಅಭಿವೃದ್ಧಿಪಡಿಸಲಾಗುತ್ತಿದೆ.<br><br>2. ಸಾರ್ವಜನಿಕರಿಗೆ ಆನ್‌ಲೈನ್ ಮುಖಾಂತರ ಸೇವೆಗಳನ್ನು ಕಾವೇರಿ ಆನ್‌ಲೈನ್ ಸರ್ವೀಸಸ್ ಅನುಷ್ಠಾನಗೊಳಿಸಲಾಗಿರುತ್ತದೆ. ಇದರ ಮುಖಾಂತರ ಸಾರ್ವಜನಿಕರು ಆನ್‌ಲೈನ್ ಮೂಲಕ ಋಣಭಾರ ಪ್ರಮಾಣಪತ್ರ (ಇ.ಸಿ) ಹಾಗೂ ದಸ್ತಾವೇಜುಗಳ ಧೃಢೀಕೃತ ನಕಲು ಪ್ರತಿ (ಸಿ.ಸಿ)ನ್ನು ಪಡೆಯಬಹುದಾಗಿದೆ. ಹಾಗೂ ಸದರಿ ಪೋರ್ಟಲ್‌ನಲ್ಲಿ ಮುದ್ರಾಂಕ ಹಾಗೂ ನೋಂದಣಿ ಶುಲ್ಕಗಳ ವಿವರ ಮತ್ತು ಸ್ವತ್ತಿನ ಮಾರ್ಗಸೂಚಿ ದರದ ಮಾಹಿತಿ ಪಡೆಯಬಹುದಾಗಿರುತ್ತದೆ. |

. . . 4

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 3. ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ತಂತ್ರಾಂಶವನ್ನು ಈ ಕೆಳಗೆ ತಿಳಿಸಿರುವ ಇಲಾಖೆಗಳ ತಂತ್ರಾಂಶಗಳೊಂದಿಗೆ ಸಂಯೋಜಿಸಲಾಗಿರುತ್ತದೆ. |

| ಕ್ರ. ಸಂ | ಇಲಾಖೆಯ ಹೆಸರು | ತಂತ್ರಾಂಶ ದ ಹೆಸರು | ಷರಾ |
|---|---|---|---|
| 1 | ಕಂದಾಯ ಇಲಾಖೆ | ಭೂಮಿ | ರಾಜ್ಯಾದ್ಯಂತ ಅಳವಡಿಸಿದೆ. |
| 2 | ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ | ಮೋಜಿಣಿ | ರಾಜ್ಯಾದ್ಯಂತ ಅಳವಡಿಸಿದೆ. |
| 3 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಇ-ಸ್ವತ್ತು | ರಾಜ್ಯಾದ್ಯಂತ ಅಳವಡಿಸಿದೆ. |
| 4 | ನಗರಾಭಿವೃದ್ಧಿ ಇಲಾಖೆ | ಇ-ಆಸ್ತಿ | ರಾಮನಗರ & ಕನಕಪುರ ಉಪ ನೋಂದಣಿ ಕಛೇರಿಗಳಲ್ಲಿ ಮತ್ತು ಬಿಬಿಎಂಪಿ ವ್ಯಾಪ್ತಿಯ ಕೆಲವು ವಾರ್ಡ್‌ಗಳಲ್ಲಿ ಸಂಯೋಜಿಸಲಾಗಿದೆ |
| 5 | ನಗರಾಭಿವೃದ್ಧಿ ಇಲಾಖೆ | ಯು.ಪಿ.ಓ. ಆರ್ | ಮಂಗಳೂರು & ಶಿವಮೊಗ್ಗ ಉಪ ನೋಂದಣಿ ಕಛೇರಿಗಳಲ್ಲಿ (ಐಚ್ಛಿಕವಾಗಿ) |
| 6 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸಕಾಲ | ರಾಜ್ಯಾದ್ಯಂತ ಅಳವಡಿಸಿದೆ. |
| 7 | ಇ-ಆಡಳಿತ ಇಲಾಖೆ | 'FRUITS' | ರಾಜ್ಯಾದ್ಯಂತ ಅಳವಡಿಸಿದೆ. |
| 8 | ವಿದ್ಯುನ್ಮಾನ ನಾಗರೀಕ ಸೇವಾ ವಿತರಣಾ ನಿರ್ದೇಶನಾಲಯ (ಇ.ಡಿ.ಸಿಎಸ್) | ಓ.ಟಿ.ಪಿ ಸೇವೆಗಳು | ಕಾವೇರಿ ಆನ್‌ಲೈನ್ ಸೇವೆಗಳಲ್ಲಿ ಸಂಯೋಜಿಸಲಾಗಿದೆ. |
| 9 | ಆರ್ಥಿಕ ಇಲಾಖೆ | ಖಜಾನೆ-2 | ಕಾವೇರಿ ಆನ್‌ಲೈನ್ ಸೇವೆಗಳು ಮತ್ತು ಕಾವೇರಿ ಆನ್‌ಲೈನ್ ಫಾರ್ಮ್ ರಿಜಿಸ್ಟ್ರೇಶನ್‌ನಲ್ಲಿ ಸಂಯೋಜಿಸಲಾಗಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | |

| | | | |
|---|---|---|---|
| 10 | ಇ–ಆಡಳಿತ ಇಲಾಖೆ | e-Sign | ಕಾವೇರಿ ಆನ್‌ಲೈನ್ ಸೇವೆಗಳಲ್ಲಿ ಸಂಯೋಜಿಸಲಾಗಿದೆ. |
| 11 | ಇ–ಆಡಳಿತ ಇಲಾಖೆ | Digi Locker | ಕಾವೇರಿ ಆನ್‌ಲೈನ್ ಸೇವೆಗಳಲ್ಲಿ ಸಂಯೋಜಿಸಲಾಗಿದೆ. |

4. ಕೃಷಿ ಸಾಲಗಳಿಗೆ ಸಂಬಂಧಿಸಿದ ಘೋಷಣಾ ಪತ್ರಗಳು (Declaration / Form -3), ಸಾಲ ತೀರುವಳಿ ಪತ್ರ ಹಾಗೂ ಅಡಮಾನ ಪತ್ರಗಳನ್ನು ಕಾವೇರಿ ತಂತ್ರಾಂಶದಲ್ಲಿ ಆನ್‌ಲೈನ್ ಮುಖಾಂತರ ಫೈಲಿಂಗ್ ಮಾಡಲು ಅವಕಾಶವಾಗುವಂತೆ ಇ–ಆಡಳಿತ ಇಲಾಖೆಯ 'FRUITS' ತಂತ್ರಾಂಶದೊಂದಿಗೆ ಕಾವೇರಿ ತಂತ್ರಾಂಶವನ್ನು ಸಂಯೋಜಿಸಲಾಗಿರುತ್ತದೆ.

5. 'Block Chain' ಆಧಾರಿತ ದಸ್ತಾವೇಜುಗಳ ನೋಂದಣಿಯನ್ನು ಇ–ಆಡಳಿತ ಇಲಾಖೆಯ ಸಹಯೋಗದೊಂದಿಗೆ ಗುಬ್ಬಿ ಮತ್ತು ಜಗಳೂರು ಉಪ ನೋಂದಣಿ ಕಛೇರಿಗಳಲ್ಲಿ ಫೈಲಟ್ ಆಧಾರದ ಮೇಲೆ ಅನುಷ್ಠಾನಗೊಳಿಸಲಾಗಿರುತ್ತದೆ. ಸದರಿ ತಂತ್ರಜ್ಞಾನವನ್ನು ಹೆಚ್ಚುವರಿಯಾಗಿ 04 ಉಪ ನೋಂದಣಿ ಕಛೇರಿಗಳಿಗೆ ಫೈಲಟ್ ಆಧಾರದ ಮೇಲೆ ವಿಸ್ತರಿಸಲು ಕ್ರಮಕೈಗೊಳ್ಳಲಾಗಿದೆ.

6. ನೋಂದಣಿ ಮತ್ತು ಮುದ್ರಾಂಕ ಇಲಾಖೆಯು "ಸುರಭಿ" ಯೋಜನೆಯಡಿ ಪಾರಂಪರಿಕ ಕಾನೂನಾತ್ಮಕ ದಾಖಲೆಗಳನ್ನು ಹಂತ ಹಂತವಾಗಿ ಸ್ಕ್ಯಾನಿಂಗ್ ಮತ್ತು ಡಿಜಟಲೀಕರಣ ಮಾಡಿ ಸಂರಕ್ಷಿಸಿಡಲು ಉದ್ದೇಶಿಸಿದ್ದು, ಹಾಲಿ ಫೈಲಟ್ ಆಧಾರದ ಮೇಲೆ ಸದರಿ ಯೋಜನೆಯನ್ನು ಗಾಂಧಿನಗರ ಉಪ ನೋಂದಣಿ ಕಛೇರಿಯಲ್ಲಿ ಕೈಗೊಳ್ಳಲಾಗಿರುತ್ತದೆ.

7. ಇಲಾಖೆಯ ಎಲ್ಲಾ ಅಧಿಕಾರಿ / ಸಿಬ್ಬಂದಿಗಳಿಗೆ ಡಿಜಿಟಲ್ ಸಿಗ್ನೇಚರ್ ಸರ್ಟಿಫಿಕೇಟ್‌ಗಳನ್ನು (DSC) ನೀಡಲು ಕ್ರಮವಹಿಸಲಾಗಿದೆ.

8. ಎಲ್ಲಾ ಉಪ ನೋಂದಣಿ ಕಛೇರಿಗಳಿಗೆ ಹೊಸ ಯು.ಪಿ.ಎಸ್ ಹಾಗೂ ಬ್ಯಾಟರಿಗಳನ್ನು ಅಳವಡಿಸಲಾಗಿರುತ್ತದೆ.

9. ಉಪ ನೋಂದಣಿ ಕಛೇರಿಗಳಲ್ಲಿ ಹಾಲಿ ಇರುವ ಹಾರ್ಡವೇರ್‌ಗಳು 2013ರಲ್ಲಿ ಖರೀದಿಸಲಾಗಿದ್ದು, ಇವುಗಳ ಕಾರ್ಯಾವಧಿ ಮುಗಿದಿರುವುದರಿಂದ ಹೊಸ ಹಾರ್ಡವೇರ್‌ಗಳ ಸರಬರಾಜು ಹಾಗೂ ನಿರ್ವಹಣೆಗೆ ಸೇವಾ ಪೂರೈಕೆದಾರರನ್ನು BOO ಮಾದರಿಯಲ್ಲಿ ಆಯ್ಕೆ ಮಾಡಲು ನಿರ್ಧರಿಸಲಾಗಿದ್ದು,

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಅದರಂತೆ ಆರ್.ಎಫ್.ಪಿ ಯನ್ನು ಸಿದ್ಧಪಡಿಸಿ ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ.<br><br>10. ಕಾವೇರಿ ತಂತ್ರಾಂಶಕ್ಕೆ ಸಂಬಂಧಿಸಿದಂತೆ ಹಾಗೂ ಇಲಾಖೆಯಲ್ಲಿನ ಹಾರ್ಡ್‌ವೇರ್ ಮತ್ತು ಇತರೆ ಗಣಕೀಕರಣದ ವಿಷಯಗಳಿಗೆ ಸಂಬಂಧಿಸಿದಂತೆ ಅಗತ್ಯ ಮಾರ್ಗದರ್ಶನವನ್ನು ನೀಡಲು ಕಾವೇರಿ ಯೋಜನಾ ಉಸ್ತುವಾರಿ ಘಟಕಕ್ಕೆ ಹೊರಗುತ್ತಿಗೆ ಆಧಾರದ ಮೇಲೆ ತಾಂತ್ರಿಕ ಸದಸ್ಯರನ್ನು ಮೆ:ಕೆಪಿಎಂಜಿ ಅಡ್ವೇಜರಿ ಸರ್ವೀಸಸ್ ಪ್ರೈ.ಲಿ ಸಂಸ್ಥೆಯಿಂದ ನೇಮಕ ಮಾಡಿಕೊಳ್ಳಲಾಗಿದೆ.<br><br>11. ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳಿಗೆ ಹಾರ್ಡವೇರ್ ಇಂಜಿನಿಯರ್‌ಗಳಿಗೆ ಮತ್ತು ಡೇಟಾ ಎಂಟ್ರಿ ಆಪರೇಟರ್‌ಗಳಿಗೆ ಕಾವೇರಿ ತಂತ್ರಾಂಶ ಹಾಗೂ ಗಣಕೀಕರಣಕ್ಕೆ ಸಂಬಂಧಿಸಿದ ವಿಷಯಗಳಿಗೆ ತರಬೇತಿ ನೀಡಲು ಗಣಕಯಂತ್ರ ತರಬೇತಿ ಕೋಶವನ್ನು ಪ್ರಾರಂಭಿಸಲಾಗಿರುತ್ತದೆ. ಸದರಿ ತರಬೇತಿ ಕೋಶದಲ್ಲಿ ಇಲ್ಲಿಯವರೆಗೆ ಜಿಲ್ಲಾ ನೋಂದಣಾಧಿಕಾರಿಗಳಿಗೆ 02 ಬ್ಯಾಚ್‌ಗಳಲ್ಲಿ, ಹಾರ್ಡವೇರ್ ಇಂಜಿನಿಯರ್‌ಗಳಿಗೆ 03 ಬ್ಯಾಚ್‌ಗಳಲ್ಲಿ, ದ್ವಿತೀಯ ದರ್ಜೆ ಸಹಾಯಕರಿಗೆ 02 ಬ್ಯಾಚ್‌ಗಳಲ್ಲಿ, ಗಣಕಯಂತ್ರ ನಿರ್ವಾಹರಿಗೆ 07 ಬ್ಯಾಚ್‌ಗಳಲ್ಲಿ ಹಾಗೂ ಪ್ರಥಮ ದರ್ಜೆ ಸಹಾಯಕರುಗಳಿಗೆ 06 ಬ್ಯಾಚ್‌ಗಳಲ್ಲಿ ತರಬೇತಿ ನೀಡಲಾಗಿದೆ. |
| ಈ | ಸಾಫ್ಟ್‌ವೇರ್ ಮತ್ತು ಹಾರ್ಡ್‌ವೇರ್‌ಗಳನ್ನು ಬದಲಿಸಿ ಯಾವ ಕಾಲಮಿತಿಯಲ್ಲಿ ಸದರಿ ಸಮಸ್ಯೆಯನ್ನು ಪರಿಹರಿಸಲು ರೈತರು ಹಾಗೂ ಜನ ಸಾಮಾನ್ಯರಿಗೆ ತ್ವರಿತವಾಗಿ ಸೇವೆಗಳನ್ನು ಒದಗಿಸಲು ಕ್ರಮಕೈಗೊಳ್ಳಲಾಗುವುದೇ? | 1. ಹೊಸ ತಂತ್ರಜ್ಞಾನವನ್ನು ಉಪಯೋಗಿಸಿಕೊಂಡು ಕಾವೇರಿ-2.0 ತಂತ್ರಾಂಶವನ್ನು ಮೆ: ಸೆಂಟರ್ ಫಾರ್ ಸ್ಮಾರ್ಟ್‌ಗೌವನೆನ್ಸ್ ಸಹಯೋಗದೊಂದಿಗೆ ಅಭಿವೃದ್ಧಿಪಡಿಸಲಾಗುತ್ತಿರುತ್ತದೆ. ತಂತ್ರಾಂಶವು ಅಭಿವೃದ್ಧಿಯ ಹಂತದಲ್ಲಿದ್ದು, ಇದನ್ನು ಶೀಘ್ರವಾಗಿ ಪೂರ್ಣಗೊಳಿಸಿ ಉಪ ನೋಂದಣಿ ಕಛೇರಿಗಳಿಗೆ ಅಳವಡಿಸಬೇಕಾಗಿರುತ್ತದೆ.<br><br>2. ಉಪ ನೋಂದಣಿ ಕಛೇರಿಗಳಲ್ಲಿ ಹಾಲಿ ಇರುವ ಹಾರ್ಡವೇರ್‌ಗಳು 2013ರಲ್ಲಿ ಖರೀದಿಸಲಾಗಿದ್ದು, ಇವುಗಳ ಕಾರ್ಯಾವಧಿ ಮುಗಿದಿರುವುದರಿಂದ ಹೊಸ ಹಾರ್ಡವೇರ್‌ಗಳ ಸರಬರಾಜು ಹಾಗೂ ನಿರ್ವಹಣೆಗೆ ಸೇವಾ ಪೂರೈಕೆದಾರರನ್ನು BOO ಮಾದರಿಯಲ್ಲಿ ಆಯ್ಕೆ ಮಾಡಲು ನಿರ್ಧರಿಸಲಾಗಿದ್ದು, ಅದರಂತೆ ಆರ್.ಎಫ್.ಪಿ.ಗೆ ಅನುಮೋದನೆ ನೀಡಲು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಕಂಇ/588/ಎಂಎನ್‌ಎಸ್‌ಎ/2021

(ಆರ್.ಅಶೋಕ)

ಕಂದಾಯ ಸಚಿವರು